# ಕರ್ನಾಟಕ ವಿಧಾನ ಪರಿಷತ್ತು

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 667 |
| 2 | ಸದಸ್ಯರ ಹೆಸರು | : | ಶ್ರೀ ಎನ್ ಎಸ್ ಬೋಸ್ ರಾಜು (ವಿಧಾನಸಭೆಯಿಂದ ಚುನಾಯಿತರಾದವರು) |
| 3 | ಉತ್ತರಿಸಬೇಕಾದ ದಿನಾಂಕ | : | 19.02.2018 |
| 4 | ಉತ್ತರಿಸುವ ಸಚಿವರು | : | ಮಾನ್ಯ ಯೋಜನೆ, ಸಾಂಖ್ಯಿಕ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವರು |

| | ಪ್ರಶ್ನೆ | ಉತ್ತರ |
|---|---|---|
| ಅ) | 2013-14ನೇ ಸಾಲಿನಿಂದ ಹೈದ್ರಾಬಾದ್-ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ ವತಿಯಿಂದ ಇಲ್ಲಿಯವರೆಗೂ ಆರು ಜಿಲ್ಲೆಗಳಿಗೆ ನೀಡಿರುವ ಅನುದಾನ ಎಷ್ಟು; ಕೈಗೆತ್ತಿಕೊಂಡಿರುವ ಕಾಮಗಾರಿಗಳು ಎಷ್ಟು; | 2013-14 ನೇ ಸಾಲಿನಿಂದ ಹೈದ್ರಾಬಾದ್-ಕರ್ನಾಟಕ ಪ್ರದೇಶ ಅಭಿವೃದ್ಧಿ ಮಂಡಲಿ ವತಿಯಿಂದ ದಿನಾಂಕ 15.02.2018ರ ವರೆಗೆ ಆರು ಜಿಲ್ಲೆಗಳಿಗೆ ಒಟ್ಟು ಮಂಜೂರು ಮಾಡಲಾಗಿರುವ 13327 ಕಾಮಗಾರಿಗಳನ್ನು ಅನುಷ್ಠಾನಗೊಳಿಸುವ ಸಲುವಾಗಿ ಒಟ್ಟು ರೂ. 4240.36 ಕೋಟಿ ಅನುದಾನವನ್ನು ಹಂಚಿಕೆ ಮಾಡಲಾಗಿರುತ್ತದೆ. |
| ಆ) | 2017-18ನೇ ಸಾಲಿನಲ್ಲಿ ಹೈದ್ರಾಬಾದ್-ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ ವತಿಯಿಂದ ಮ್ಯಾಕ್ರೋ (Macro) ಯೋಜನೆಯಲ್ಲಿ ಆರು ಜಿಲ್ಲೆಗಳಿಗೆ ನೀಡಿರುವ ಅನುದಾನ ಎಷ್ಟು; ಈ ಯೋಜನೆಯಲ್ಲಿ ರಾಯಚೂರು ಜಿಲ್ಲೆಗೆ ಮಂಜೂರಾದ ಅನುದಾನ ಎಷ್ಟು? (ವಿವರ ನೀಡುವುದು) | 2017-18 ನೇ ಸಾಲಿನಲ್ಲಿ ಹೈದ್ರಾಬಾದ-ಕರ್ನಾಟಕ ಪ್ರದೇಶ ಅಭಿವೃದ್ಧಿ ಮಂಡಲಿ ವತಿಯಿಂದ ಮ್ಯಾಕ್ರೋ ಯೋಜನೆಯಲ್ಲಿ ಆರು ಜಿಲ್ಲೆಗಳಿಗೆ 1145 ಕಾಮಗಾರಿಗಳನ್ನು ಅನುಷ್ಠಾನಿಸಲು ಒಟ್ಟು ರೂ. 669.34 ಕೋಟಿ ಅನುದಾನವನ್ನು ಹಂಚಿಕೆ ಮಾಡಲಾಗಿದ್ದು, ಈ ಪೈಕಿ ರಾಯಚೂರು ಜಿಲ್ಲೆಗೆ 265 ಕಾಮಗಾರಿಗಳನ್ನು ಅನುಷ್ಠಾನಿಸಲು ಒಟ್ಟು ರೂ. 118.83 ಕೋಟಿಗಳನ್ನು ಹಂಚಿಕೆ ಮಾಡಲಾಗಿರುತ್ತದೆ. |

ಸಂಖ್ಯೆ: ಯೋಇ 33 ಹೈಕವಿ 2018

M. R. Seetharam 17/2/18

(ಎಂ.ಆರ್. ಸೀತಾರಾಂ)
ಯೋಜನೆ, ಸಾಂಖ್ಯಿಕ ಹಾಗೂ
ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವರು

**ಕರ್ನಾಟಕ ಸರ್ಕಾರ**

ಸಂಖ್ಯೆ:ಯೋಇ 32 ಹೈಕವಿ 2018

ಕರ್ನಾಟಕ ಸರ್ಕಾರದ ಸಚಿವಾಲಯ
ಯೋಜನಾ ಇಲಾಖೆ, ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ: 17.02.2018

**ಇವರಿಂದ**
ಸರ್ಕಾರದ ಅಪರ ಮುಖ್ಯಕಾರ್ಯದರ್ಶಿಗಳು,
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು
ಸಾಂಖ್ಯಿಕ ಇಲಾಖೆ, ಬಹುಮಹಡಿ ಕಟ್ಟಡ,
**ಬೆಂಗಳೂರು.**

**ಇವರಿಗೆ,**
ಕಾರ್ಯದರ್ಶಿಗಳು
ಹೈದ್ರಾಬಾದ್ ಕರ್ನಾಟಕ ಪ್ರದೇಶ ಅಭಿವೃದ್ಧಿ ಮಂಡಲಿ
ಅಭಿವೃದ್ಧಿ ಭವನ,
ಐವಾನ-ಎ-ಶಾಹಿ
**ಕಲಬುರಗಿ-585102.**

ಮಾನ್ಯರೆ,

ವಿಷಯ: Establishment of Centre of Excellence for Automotive and Infrastructure in kalaburagi.

ಉಲ್ಲೇಖ : ಸರ್ಕಾರದ ಉಪ ಕಾರ್ಯದರ್ಶಿ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಮತ್ತು ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ:ಐಟಿಡಿ 05 ಎಡಿಎಂ 2018, ದಿನಾಂಕ 12.02.2018 (ಪ್ರತಿ ಲಗತ್ತಿಸಿದೆ).

ಉಲ್ಲೇಖಿತ ಟಿಪ್ಪಣಿಯಲ್ಲಿ ಕಲಬುರಗಿಯಲ್ಲಿ ಹೈದ್ರಾಬಾದ್ ಕರ್ನಾಟಕ ಪ್ರದೇಶ ಅಭಿವೃದ್ಧಿ ಮಂಡಲಿಯ ವತಿಯಿಂದ Dassault Systems ಸಹಯೋಗದೊಂದಿಗೆ ಶೇಕಡಾ 10ರಷ್ಟು ಮಂಡಲಿಯ ಭಾಗ ರೂ.18.75 ಕೋಟಿ ಹಾಗೂ ಉಳಿದ ಶೇಕಡಾ 90ರಷ್ಟು Dassault Systems ಸಂಸ್ಥೆಯ ಭಾಗ ರೂ.153.28 ಕೋಟಿ ,ಒಟ್ಟು ರೂ.172.03 ಕೋಟಿ ವೆಚ್ಚದಲ್ಲಿ ಕಲಬುರಗಿಯಲ್ಲಿ Centre of Excellence for Automotive & Infrastructure ನ್ನು ಸ್ಥಾಪಿಸಲು ಪ್ರಸ್ತಾಪಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಈ ಕೆಳಕಂಡ ಅಂಶಗಳಿಗೆ ಮಾಹಿತಿಯನ್ನು ಒದಗಿಸುವಂತೆ ಕೋರಲು ನಿರ್ದೇಶಿಸಲ್ಪಟ್ಟಿದ್ದೇನೆ.

1. ಮಂಡಲಿಯು ಪ್ರಸ್ತಾವನೆಯ ಮೂಲ ಪ್ರತಿಯೊಂದಿಗೆ ಮಂಜೂರಾತಿ ಆದೇಶ ಕೋರಿ ಸರ್ಕಾರಕ್ಕೆ ಸಲ್ಲಿಸುವುದು.
2. ಪ್ರಸ್ತಾಪಿತ ಕಾರ್ಯಕ್ರಮದಲ್ಲಿ ಕೈಗೊಳ್ಳಲು ಯೋಜಿಸಿರುವ ಕಾರ್ಯಕ್ರಮವಾರು ವಿವರಗಳನ್ನೊಳಗೊಂಡ ಯೋಜನಾ ವರದಿಯನ್ನು ಸಲ್ಲಿಸುವುದರ ಜೊತೆಗೆ ಸದರಿ ಕಾರ್ಯಕ್ರಮದಿಂದ/ಯೋಜನೆಯಿಂದ ನಿರೀಕ್ಷಿಸುವ ಫಲಿತಾಂಶಗಳ ವಿವರಗಳನ್ನು ನೀಡುವುದು.
3. 2017-18ನೇ ಸಾಲಿನ ಕ್ರಿಯಾ ಯೋಜನೆಯಲ್ಲಿ ಪ್ರಸ್ತಾಪಿತ ಕಾಮಗಾರಿಯು ಮಂಜೂರಾಗಿರುವ ಮಾಹಿತಿಯನ್ನು ಒದಗಿಸುವುದು.